# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 498
**ಸದಸ್ಯರ ಹೆಸರು** : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 10.12.2020
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮದ (K.R.E.D.L) ನೌಕರರ ನೇಮಕಾತಿ ಸಂಬಂಧ ಸರ್ಕಾರವು ಲೋಕಾಯುಕ್ತ ತನಿಖೆಗೆ ವಹಿಸಿದ್ದು ಯಾವಾಗ; (ಆದೇಶದ ಪ್ರತಿ ನೀಡುವುದು) | ಇಂಧನ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಲ್ಲಿ ನೌಕರರ ನೇಮಕಾತಿ ಸಂಬಂಧ ಸರ್ಕಾರದ ಆದೇಶ ಸಂಖ್ಯೆ: ಇಎನ್ 5 ಸ್ವೀಮರ 2008 (2), ದಿನಾಂಕ:05.11.2008 ರಂತೆ ಲೋಕಾಯುಕ್ತ ವಿಚಾರಣೆಗೆ ವಹಿಸಲಾಗಿತ್ತು. **ಅನುಬಂಧ-1** |
| ಆ) | ಲೋಕಾಯುಕ್ತದಲ್ಲಿನ ತನಿಖೆ ಯಾವ ಹಂತದಲ್ಲಿದೆ; ಯಾವ ಕಾಲಮಿತಿಯೊಳಗೆ ತನಿಖಾ ವರದಿಯನ್ನು ಸಲ್ಲಿಸಲಾಗುವುದು; | ಮಾನ್ಯ ಲೋಕಾಯುಕ್ತಕ್ಕೆ ತನಿಖೆಗೆ ವಹಿಸಲಾದ ದೂರಿನ ಸಂಖ್ಯೆ:ಕಂ.ಲೋಕ್.ಬಿಸಿಡಿ. 424/2008 ಪ್ರಕರಣವು ದಿನಾಂಕ:22.10.2013 ರಂದು ಮುಕ್ತಾಯಗೊಂಡಿರುತ್ತದೆ. **ಅನುಬಂಧ-2** |
| ಇ) | ನೇಮಕಾತಿಯಲ್ಲಿ ಪ್ರತಿಭಾವಂತ ಅಭ್ಯರ್ಥಿಗಳಿಗೆ ಅನ್ಯಾಯವಾಗಿದ್ದು ಅವರಿಗೆ ಸರ್ಕಾರ ಯಾವ ರೀತಿ ನ್ಯಾಯ ಒದಗಿಸಲಿದೇ? | ಉದ್ಭವಿಸುವುದಿಲ್ಲ. |

ಸಂಖ್ಯೆ: ಎನರ್ಜಿ 229 ಇಬಿಎಸ್ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

53

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಇಂಧನ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಲ್ಲಿ ವಿವಿಧ ಹುದ್ದೆಗಳಿಗೆ 40 ಅಭ್ಯರ್ಥಿಗಳನ್ನು ನೇಮಕಾತಿ ಮಾಡಿರುವ ಕುರಿತು – ಲೋಕಾಯುಕ್ತ ತನಿಖೆ.

ಓದಲಾಗಿದೆ: ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ:ಕ್ರೆಡಲ್/ಆಡಳಿತ/ಜಿ/ ಎಡಿಎಂ/2008/1752, ದಿನಾಂಕ:20-10-2008.

– – – –

2484
13/11/08

13/XI

**ಪ್ರಸ್ತಾವನೆ:-**

1) ಮೇಲೆ ಓದಲಾದ ಪತ್ರದಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯಲ್ಲಿ 2004-05 ಮತ್ತು 2006-07ನೇ ಸಾಲಿನಲ್ಲಿ ವಿವಿಧ ಹುದ್ದೆಗಳಿಗೆ 40 ಅಭ್ಯರ್ಥಿಗಳ ನೇಮಕಾತಿಯನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಾಡಲಾಗಿದ್ದು, ಸರ್ಕಾರದಲ್ಲಿ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ನು ಅಭ್ಯರ್ಥಿಗಳನ್ನು ನೇಮಕ ಮಾಡುವಾಗ ಪಾಲಿಸಲಾಗಿರುವುದಿಲ್ಲವೆಂದು ಹಾಗೂ ಆಯ್ಕೆ ಸಮಿತಿಯನ್ನು ರಚಿಸಿರುವುದಿಲ್ಲವೆಂದು ಮತ್ತು ಅಭ್ಯರ್ಥಿಗಳನ್ನು ನೇಮಕಾತಿ ಮಾಡುವ ಮುನ್ನ ಅಧಿಸೂಚನೆಯನ್ನು ಹೊರಡಿಸಿರುವುದಿಲ್ಲವೆಂದು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಲ್ಲಿ ಮೇಲ್ಕಂಡ 40 ಅಭ್ಯರ್ಥಿಗಳನ್ನು ನೇಮಕಾತಿ ಮಾಡುವಾಗ ಚಾಲ್ತಿಯಲ್ಲಿರುವ ಸರ್ಕಾರದ ಸಾಮಾನ್ಯ ನೇಮಕಾತಿ ಆದೇಶಗಳು / ಮೀಸಲಾತಿ ನಿಯಮಗಳು, ಇತ್ಯಾದಿಗಳನ್ನು ಪಾಲಿಸದೇ ಇರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಈ ಕುರಿತು ಹೆಚ್ಚಿನ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಕಲಂ 7 (2A) ಅಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ಪ್ರಕರಣವನ್ನು ವಹಿಸಲು ಸರ್ಕಾರ ತೀರ್ಮಾನಿಸಿದೆ. ಆದುದರಿಂದ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 5 ಸ್ಲೀಮರ 2008 (2), ಬೆಂಗಳೂರು, ದಿನಾಂಕ:05-11-2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭದಲ್ಲಿ, 2004-05 ಮತ್ತು 2006-07ನೇ ಸಾಲಿನಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಲ್ಲಿ ಅನುಬಂಧದಲ್ಲಿ ನಮೂದಿಸಿರುವ ವಿವಿಧ ಹುದ್ದೆಗಳಿಗೆ 40 ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಸರ್ಕಾರದಲ್ಲಿ ಚಾಲ್ತಿಯಲ್ಲಿರುವ ಸಾಮಾನ್ಯ ನೇಮಕಾತಿ ನಿಯಮಗಳನ್ನು ಪಾಲಿಸದೆ, ಅಭ್ಯರ್ಥಿಗಳ ನೇಮಕಾತಿಯಲ್ಲಿ ನಡೆದಿರಬಹುದಾದ ವ್ಯಪರೀತ್ಯಗಳು (abnormalities) ಅಥವಾ ಅಕ್ರಮಗಳ (deviations) ಬಗ್ಗೆ ವಿವರವಾದ ವಿಚಾರಣೆ ನಡೆಸಲು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಕಲಂ 7 (2A) ಅಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.

ಸದರಿ ವಿಚಾರಣೆಗೆ ಸಂಬಂಧಿಸಿದಂತೆ ಪರಿಶೀಲನಾ ಅಂಶಗಳು ಈ ಕೆಳಕಂಡಂತೆ ಇರುತ್ತವೆ:-

ಅ) ಸದರಿ ನೇಮಕಾತಿಯನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಅವಶ್ಯಕತೆ ಆಧಾರದ ಮೇಲೆ ಮಾಡಲಾಗಿದೆಯೇ?

ಆ) ಸದರಿ ನೇಮಕಾತಿಗಳಲ್ಲಿ ಸಾಮಾನ್ಯ ನೇಮಕಾತಿ / ವಿಶೇಷ ನೇಮಕಾತಿ ನಿಯಮಗಳಲ್ಲಿನ ಕಾರ್ಯ ವಿಧಾನವನ್ನು ಅನುಸರಿಸಲಾಗಿದೆಯೇ? ಹಾಗೂ ಪ್ರಸ್ತುತ ಜಾರಿಯಲ್ಲಿರುವ ಮೀಸಲಾತಿ ನಿಯಮಗಳು / ಆದೇಶಗಳನ್ನು ಪಾಲಿಸಲಾಗಿದೆಯೇ?

ಇ) ಸದರಿ ನೇಮಕಾತಿ ಪ್ರಕ್ರಿಯೆಯನ್ನು ಪಾರದರ್ಶಕವಾಗಿ ನಡೆಸಲಾಗಿದೆಯೇ? ಇಲ್ಲದಿದ್ದಲ್ಲಿ, ಸದರಿ ನೇಮಕಾತಿ ಪ್ರಕ್ರಿಯೆಯಲ್ಲಿ ವೈಪರೀತ್ಯ (abnormality) ಅಥವಾ ಅಕ್ರಮಗಳು ನಡೆದಿವೆಯೇ?

ಈ) ರಚಿಸಲಾಗಿದ್ದ ಆಯ್ಕೆ ಸಮಿತಿಯು ಸದರಿ ನೇಮಕಾತಿಗೆ ಸಂಬಂಧಿಸಿದ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ನಡವಳಿಯನ್ನು ನಿರ್ವಹಿಸಿದೆಯೇ?

ಉ) ಸದರಿ ಆಯ್ಕೆ / ನೇಮಕಾತಿ ಪ್ರಕ್ರಿಯೆಯಲ್ಲಿ ಪ್ರತಿಭಾವಂತ ಅಭ್ಯರ್ಥಿಗಳಿಗೆ ಅನ್ಯಾಯ ಮಾಡಲಾಗಿದೆಯೇ?

ಊ) ಸದರಿ ಆಯ್ಕೆ / ನೇಮಕಾತಿ ಪ್ರಕ್ರಿಯೆಯಲ್ಲಿ ಯಾವುದಾದರೂ ಒಂದೇ ಭಾಗದ / ವರ್ಗದ ಅಭ್ಯರ್ಥಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಆಯ್ಕೆ / ನೇಮಕಾತಿ ಮಾಡಲಾಗಿದೆಯೇ? ಮತ್ತು

ಋ) ವೈಪರೀತ್ಯ, ಅಕ್ರಮ / ಅನ್ಯಾಯಗಳು ನಡೆದಿದ್ದರೆ, ಅವುಗಳು ಮರುಕಳಿಸದಂತೆ ತೆಗೆದುಕೊಳ್ಳಬಹುದಾದ ಪರಿಹಾರೋಪಾಯ ಕ್ರಮಗಳ ಬಗ್ಗೆ ಶಿಫಾರಸ್ಸು.

ಈ ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ಶೀಘ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು.

ಈ ಪ್ರಕರಣಕ್ಕೆ ಅಗತ್ಯವಿರುವ ಮೂಲ ಕಡತಗಳು / ಧಾಖಲಾತಿಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಮಾನ್ಯ ಲೋಕಾಯುಕ್ತರಿಗೆ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

5/11

(ಎಸ್.ಜೆ.ಸಂಪತ್ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.
☎ 2203 4674

<u>ಇವರಿಗೆ:-</u>

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು-ಪ್ರಕಟಣೆಗಾಗಿ ಮತ್ತು ಪ್ರಕಟಿಸಿದ 10 ಪ್ರತಿಗಳನ್ನು ಈ ಇಲಾಖೆಗೆ ಒದಗಿಸಲು ಕೋರಲಾಗಿದೆ.

<u>ಪ್ರತಿ:-</u>

1) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬಹುಮಹಡಿ ಕಟ್ಟಡ, ಬೆಂಗಳೂರು
2) ಮಾನ್ಯ ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು
3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು
4) ಮಾನ್ಯ ಇಂಧನ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು
5) ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಇಂಧನ ಇಲಾಖೆ, ವಿಕಾಸಸೌಧ, ಬೆಂಗಳೂರು
6) ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಇಂಧನ ಇಲಾಖೆ, ವಿಕಾಸಸೌಧ, ಬೆಂಗಳೂರು
7) [illegible]

ಕರ್ನಾಟಕ ಸರ್ಕಾರ

ನಂ:ಕಂ.ಲೋಕ್.ಬಿಸಿಡಿ424/2008

ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:10/12/2013

ಗೆ:

ಸಹಾಯಕ ಪ್ರಧಾನ ವ್ಯವಸ್ಥಾಪಕರು
ಕೆ.ಆರ್.ಇ.ಡಿ.ಎಲ್
ಬೆಂಗಳೂರು

ಸಂ. 3482
ದಿ. 13/12/13
ಬೆಂಗಳೂರು

ಮಾನ್ಯರೆ,

ವಿಷಯ: ಮಾನ್ಯ ಸರ್ಕಾರಿ ವತಿಯ ದೂರನ್ನು ಕುರಿತು.
ಉಲ್ಲೇಖ: ತಮ್ಮ ಕಛೇರಿ ಪತ್ರ ದಿನಾಂಕ:6.1.2008

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ಮೂಲಕ ತಮಗೆ ಮಾನ್ಯ ಲೋಕಾಯುಕ್ತರವರ ಆದೇಶದ ಮೇರೆಗೆ ತಿಳಿಯಪಡಿಸುವುದೇನೆಂದರೆ, ಸದರಿ ದಾವೆಗೆ ಸಂಬಂದಿಸಿದ 40 ಜನ ನೌಕರರ ಮೂಲ ದಾಖಲೆಗಳನ್ನು ದಿನಾಂಕ:6.12.2009ರಂದು ಸಲ್ಲಿಸಿದ್ದು ಇರುತ್ತದೆ.

ಈಗ ನಿಮಗೆ ತಿಳಿಯಪಡಿಸುವುದೇನೆಂದರೆ ಸದರಿ ಮೂಲ ದಾಖಲೆಗಳನ್ನು ನೀವು ನಿಮ್ಮ ಕಛೇರಿ ದೃಡೀಕೃತ ವ್ಯಕ್ತಿಯನ್ನು ನಮ್ಮ ಕಛೇರಿಗೆ ಕಳುಹಿಸಿ ಸ್ವಿಕೃತಿಯೊಂದಿಗೆ ಪಡೆಯಲು ಈ ಮಾಲಕ ತಿಳಿಸಲಾಗಿದೆ.

16/12/13

ತಮ್ಮ ವಿಶ್ವಾಸಿ,

ಲಗತ್ತು:ಮೇಲಿನಂತೆ

ಅಪರ ನಿಬಂಧಕರು, ವಿಚಾರಣೆಗಳು-1
ಕರ್ನಾಟಕ ಲೋಕಾಯುಕ್ತ,ಬೆಂಗಳೂರು.

ಅನುಬಂಧ - II

56

**ಕರ್ನಾಟಕ ಲೋಕಾಯುಕ್ತ**

ಸಂಖ್ಯೆ:ಕಂ.ಲೋಕ್.ಬಿಸಿಡಿ.424/2008

ಬಹುಮಹಡಿಗಳ ಕಟ್ಟಡ,
ಡಾ:ಬಿ.ಆರ್.ಅಂಬೇಡ್ಕರ್ ವೀಧಿ,
ಬೆಂಗಳೂರು.ದಿ:09.12.2020.

ಗೆ:

ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

ವಿಷಯ: ಸರ್ಕಾರ ವಿಚಾರಣೆಗೆ ವಹಿಸಿದ 7(2)(ಎ) ಪ್ರಕರಣದ ಕುರಿತು.

ಉಲ್ಲೇಖ: ನಿಮ್ಮ ಕಛೇರಿ ಪತ್ರ ಸಂ: ಇಂಧನ/229/ಇಬಿಎಸ್/2020,
ದಿನಾಂಕ:08-12-2020.

- * -

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ, ತಾವು ಕೋರಿರುವ ದೂರಿನ ಸಂ: ಕಂ.ಲೋಕ್.ಬಿಸಿಡಿ.242/2008ರ ಸದರಿ ಪ್ರಕರಣವು ದಿನಾಂಕ:22-10-2013 ರಂದು ಮುಕ್ತಾಯ ಗೊಂಡಿದ್ದು, ಮುಕ್ತಾಯಗೊಂಡ ಆದೇಶದ ಪ್ರತಿಯನ್ನು ಇದರೊಂದಿಗೆ ಲಗತ್ತಿಸಿ ತಮ್ಮ ಮುಂದಿನ ಕ್ರಮಕ್ಕಾಗಿ ಸಲ್ಲಿಸಿದೆ.

9.12.2020

ಅಪರ ನಿಬಂಧಕರು ವಿಚಾರಣೆಗಳು-1
(ಹೆಚ್ಚುವರಿ ಪ್ರಭಾರ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

ARE.1) -10- Compt.Lok.BCD.424/2008 49

**FINAL SCRUTINY NOTE**

1. This is a Government reference made u/s 7(2-A) of the Karnataka Lokayukta Act for investigating into the irregularities/abnormalities/illegalities committed in the appointments made in KREDL, Karnataka Power Transmission Corporation Limited and Electric Supply Companies coming under Energy Department.

2. On careful perusal of the records available in the file, it is seen that the reference relates to appointment, which cannot be taken up for investigation in view of the bar created u/s 8 (1)(a) r/w II Schedule to Karnataka Lokayukta Act. Further, it is also seen that some of the applicants have also approached Hon'ble High Court, wherein they are pending for judgement. In addition to it, as efficacious alternative remedy is available before competent court, in view of bar created u/s 8(1)(b) also, this complaint cannot be investigated.

3. **Hence, if approved,**

   i) the complaint may be closed and the reference may be returned to Govt. with the above observation.

   ii) The records/original applications of the candidates and other connected records received from the Asst. General Manager(Accts), KREDL, Bangalore vide letter dated 6.12.2008 be returned to them under due acknowledgement.

**Submitted for kind orders.**

Sd/-
**ARE.1.** 22/10/13

4. **Hon'ble Lokayukta)** Approved
Sd/-
22/10/2013